## ಉಡುಪಿಯ
# ಬಳಕೆದಾರರ ವೇದಿಕೆ: ಕಿರು ಪರಿಚಯ

**ಪೂರೈಕೆದಾರ ಎಂದರೆ ನಾವು ದಿನನಿತ್ಯ ಬಳಸುವ ವಸ್ತುಗಳ ತಯಾರಕರು ಮತ್ತು ಸರ್ಕಾರದ ವಿವಿಧ ಇಲಾಖೆಗಳು; ಹಾಗೂ ಬಳಕೆದಾರ ಎಂದರೆ ಕೊಳ್ಳುವಾತ, ಅರ್ಜಿದಾರ, ತೆರಿಗೆ ತೆರುವಾತ ಎಂದು ಸರಳವಾಗಿ ವಿಂಗಡಿಸಿ ನೋಡಿ. ಬಳಕೆದಾರನಿಗೆ ಏನಾದರೂ ಹಕ್ಕು, ನ್ಯಾಯ, ರಕ್ಷಣೆ ಸಿಗುತ್ತಿದೆಯೇ? ಅವನಿಗೆ ಹಕ್ಕುಗಳೇ ಇಲ್ಲವೆ? ತಡ, ಲಂಚ, ಕಲಬೆರಕೆ, ಅಭಾವಗಳ ವಿರುದ್ಧ ನ್ಯಾಯ, ರಕ್ಷಣೆ ಪಡೆಯಲು ಮಾರ್ಗೋಪಾಯಗಳಿಲ್ಲವೆ?**

**ಈ ದಿಕ್ಕಿನಲ್ಲಿ ಬಳಕೆದಾರರ ಹಿತರಕ್ಷಣೆಗಾಗಿ ಶ್ರಮಿಸುತ್ತಿರುವ ಉಡುಪಿಯ 'ಬಳಕೆದಾರರ ವೇದಿಕೆ'ಯ ಕಿರು ಪರಿಚಯ ಇಲ್ಲಿದೆ.**

ಮೊನ್ನೆಯಷ್ಟೆ ಉಡುಪಿಯ ನೀರು ಪೂರೈಕೆ ಹಗರಣವನ್ನು ಸಮರ್ಥವಾಗಿ ವಿಶ್ಲೇಷಿಸಿ, ಪೂರ್ಣ ವಿವರಗಳನ್ನು ಹೊರಗೆಡವಿ ನೀರು ಬಳಕೆದಾರರ ಸಂಕಷ್ಟಗಳನ್ನು ಸಚಿವರೆದುರು ನಿವೇದಿಸಿ ಸುದ್ದಿಮಾಡಿದ ಒಂದು ಸಂಘಟನೆ ಇದು. ಕೇವಲ ಎರಡು ವರ್ಷದ ಹಿಂದೆ ಮೊದಲಾದ ಈ ವೇದಿಕೆ, ನಿಷ್ಕ್ರಿಯತೆಯಿಂದ ಅಸಂಘಟಿತರೂ ತಮ್ಮ ಹಕ್ಕುಗಳ ಬಗ್ಗೆ ತಿಳುವಳಿಕೆಯಿಲ್ಲದವರೂ ಆದ ಬಳಕೆದಾರರ ಕೈಯ್ಯಲ್ಲೇ ಅವರು ಅನುಭವಿಸುವ ಅನ್ಯಾಯಗಳ, ಶೋಷಣೆಯ ನಿವಾರಣೆ ಸಾಧ್ಯವೆಂಬುದನ್ನು ತೋರಿಸಿಕೊಡಲು ಜನ್ಮ ತಾಳಿದೆ.

ನಮ್ಮ ದೇಶದಲ್ಲಿ ಮತ, ರಾಜಕಾರಣಿಗಳ ಬೆಂಬಲವಿಲ್ಲದೆ, ಸದಸ್ಯರಿಗೆ, ಚಂದಾಕ್ಕೆ ಹಾತೊರೆಯದೆ, ಪ್ರಚಾರ ಪ್ರಸಿದ್ಧಿಗಾಗಿ ಕೆಲವು ಮಹತ್ವಾಕಾಂಕ್ಷಿಗಳ ಆಟವಾಗದೆ ಯಾವ ಸಂಘಟನೆಯೂ ಉಳಿಯುವುದಿಲ್ಲ. ಇಂಥ ವಾತಾವರಣದಲ್ಲೂ ಮೇಲಿನ ಲಕ್ಷಣಗಳಿಗೆ ಆಸ್ಪದ ನೀಡದೆ ಕೇವಲ ಕೆಲಸವನ್ನು ಮಾತ್ರ ಗುರಿಯಾಗಿಟ್ಟುಕೊಂಡು ನಿಂತ ಈ ವೇದಿಕೆಯ ಹಿನ್ನೆಲೆಯಲ್ಲಿ ಇರುವುದು ಕೈಬೆರಳೆಣಿಕೆಯಷ್ಟು ಮಂದಿ ನಿಸ್ವಾರ್ಥ ಕಾರ್ಯಕರ್ತರು.

ನಮ್ಮ ಸರಕಾರದವರು ಸ್ವಾತಂತ್ರ್ಯಾನಂತರದ ಇಷ್ಟು ವರ್ಷವೂ ಕೋಟಿಗಟ್ಟಲೆ ಬಜೆಟ್ಟುಗಳಿಂದ, ಭವಿಷ್ಯದಲ್ಲಿ ಫಲ ನೀಡುತ್ತವೆಂದು, ಯೋಜನಾ ಯಜ್ಞಗಳನ್ನು ಪೂರೈಸುತ್ತ ಬಂದರು. ಹಣ ವಿಪುಲವಾಗಿ ಉತ್ಪಾದನೆಯಾದಷ್ಟು, ಬೇರೆ ಸರಕು ಉತ್ಪಾದನೆಯಾಗಲಿಲ್ಲ. ಬೇಡಿಕೆ ವಿಪರೀತವಾದರೂ ಪೂರೈಕೆ ಸೀಮಿತವಿರುವಂತೆ ನೋಡಿಕೊಂಡರು—'ಯೋಜನೆಯ ಯಜ್ಞದಲಿ ಎಸೆಯುತ್ತಿರುವವರು' ಆದ ನವ ಶ್ರೀಮಂತರು. ಅವರ ದುರ್ಲಾಭ, ಮೋಸಗಳನ್ನು ಕಾಯ್ದವರು ರಾಜಕಾರಣಿಗಳು. ಫಲ- ಸಂಘಟನೆಯಿಲ್ಲದ ಬಳಕೆದಾರರ ಅವ್ಯಾಹತ ಶೋಷಣೆ. ಭಯದಿಂದ ಕಂಗೆಟ್ಟವನಿಗೆ ತನಗೆ ಯಾವ ಹಕ್ಕೂ ಇಲ್ಲ, ಪಡೆದದ್ದೇ ಪುಣ್ಯ ಎಂದು ಭಾವನೆ ತಳೆಸಿದರು. ನ್ಯಾಯಾಲಯಗಳಲ್ಲಿ—'ಗೆದ್ದವ ಸೋತ, ಸೋತವ ಸತ್ತ' ಎನ್ನುವ ಕಷ್ಟ—ಅಪರಾಧಿಗೆ ನುಸುಳಲು ದೊಡ್ಡ ಬಾಗಿಲುಗಳನ್ನಿಟ್ಟ ಕಾನೂನು ತೊಡಕುಗಳು; ಸಮಯ ಹಾಗೂ ಹಣದ ವೆಚ್ಚ.

ಆದರೆ ಆಡಳಿತದ ಅವ್ಯವಸ್ಥೆಯನ್ನು ಜನ ಸುಮ್ಮನೆಯಂತೆ — ಗುಲಾಮರಂತೆ ಸಹಿಸಬೇಕಾದ್ದೇನೂ ಇಲ್ಲ. ಸಾಮೂಹಿಕವಾದ ಜಾಗೃತಿ ಮೂಡಿ, ಅನ್ಯಾಯವನ್ನು ಸಂಘಟಿತರಾಗಿ ಪ್ರತಿಭಟಿಸಬಲ್ಲೆವಾದರೆ ಸಾರ್ವಜನಿಕ ಅಭಿಪ್ರಾಯಕ್ಕೆ, ಶಿಕ್ಷಾ ಚಾಟಿಕ್ಕೆ ಎಂಥವರಾದರೂ ಬಾಗಲೇಬೇಕು. ಸುಮ್ಮನೆ ಸಹಿಸುತ್ತಾ ಹೋದರೆ ಅದಕ್ಕೆ ಹಾಗೂ ಶೋಷಕರ ಸ್ವಾರ್ಥಕ್ಕೆ ಮಿತಿ ಇರುವುದಿಲ್ಲ. ಕೊಡುವ ತೆರಿಗೆ ಹಾಗೂ ಪದಾರ್ಥಗಳ ಬೆಲೆಯಲ್ಲಿ ಮೋಸವಿಲ್ಲದಾಗ ಬಳಕೆದಾರನಿಗೆ ದಕ್ಕುತ್ತಿರುವುದು ಅರ್ಧ ಮೌಲ್ಯ ಮಾತ್ರ ಎಂಬ ಸ್ಥಿತಿ ನಮ್ಮದು. ಈ ಅನ್ಯಾಯದ ಸೋರಿಕೆಯನ್ನು ತಡೆಗಟ್ಟದಿದ್ದರೆ ಈ ಆರ್ಥಿಕ ಪರಿಸ್ಥಿತಿಯಲ್ಲೇ ಸಮಸ್ಥಿತಿಗೆ ಎಂಥ ಸುಧಾರಣೆ ಬಂದೀತು!

ಪಾಂಡುರಂಗ ವಿಠ್ಠಲ

ವೇದಿಕೆ ಪೂರೈಕೆದಾರರು—ಅಧಿಕಾರಿಗಳು ಹಾಗೂ ಬಳಕೆದಾರರ ನಡುವೆ ಇರುವ ಕಂದರವನ್ನು ಗಮನಿಸಿ, ಸಭೆಗಳಲ್ಲಿ ಅವರಿಬ್ಬರ ನಡುವೆ ಸಂಪರ್ಕ ಕಲ್ಪಿಸುತ್ತದೆ. ಅನ್ಯಾಯದ ವಿರುದ್ಧ ಹೋರಾಡುವಲ್ಲಿ ಮಾರ್ಗದರ್ಶಿಯಾಗಿ ಬೆಂಬಲ ನೀಡುತ್ತದೆ. ಯಾರ ಮರ್ಜಿಯನ್ನೂ ಕಾಯದೆ, ರಾಜಕಾರಣ ಅಥವಾ ಲಂಚ-ಪ್ರಭಾವಗಳ ಗೋಜಿಗೆ ಹೋಗದೆ ಕ್ರಮಬದ್ಧವಾಗಿ ಪ್ರತಿ ಸಮಸ್ಯೆಯನ್ನೂ ಹಂತ ಹಂತವಾಗಿ ಮುಖ್ಯಮಂತ್ರಿಗಳವರೆಗೂ ಒಯ್ದು ರೆ-ಆಡಳಿತ ಇರುವುದೇ ಮೂಲಭೂತವಾಗಿ ಸಾಮಾಜಿಕ ನ್ಯಾಯ ನಿರ್ವಹಣೆಗೆ ಎಂಬುವುದರಿಂದಾಗಿ-ಪರಿಹಾರ ಸಾಧ್ಯ ಎಂಬ ಪ್ರಜ್ಞೆಯನ್ನು ಬೆಳೆಸುತ್ತಿದೆ.

ಅಧಿಕಾರ-ಪೂರೈಕೆದಾರ ಹಾಗೂ ರಾಜಕಾರಣಿಗಳನ್ನು ಸಂಪರ್ಕಿಸಿ, ಅವರಿಂದ ಆಶ್ವಾಸನೆ ಪಡೆದು ಅನಂತರ ಅವರು ಅದರಂತೆ ನಡೆಯದಿದ್ದಾಗ ಪುನಃಪುನಃ ಆ ಆಶ್ವಾಸನೆ ನೆನಪಿಸಿ ಕೆಲಸ ಮಾಡಿಸುವುದು, ಒಂದು ಸಮಸ್ಯೆ ಪರಿಹಾರವಾಗದಿದ್ದರೆ ಅದು ಯಾವ ಹಂತದಲ್ಲಿದೆ, ಪುನಃ ಒದಗಿದ ತೊಡಕುಗಳೇನು, ಯಾವರೀತಿ ಪರಿಹಾರ ಕಂಡಿತು ಎಂದೆಲ್ಲ ವಿವರಗಳನ್ನು ನೀಡುತ್ತಾ ಬರುವುದು ಹಾಗೂ ಸಮಸ್ಯೆ ಕೊನೆಗೊಂಡಾಗ ಸಂಬಂಧಪಟ್ಟ ಪೂರೈಕೆದಾರರ, ಅಥವಾ ಅಧಿಕಾರಿಗಳು ದಕ್ಷರಾಗಿದ್ದು ಶೀಘ್ರ ಪರಿಹಾರ ನೀಡಿದ್ದಲ್ಲಿ ಅವರ ಕೆಲಸಕ್ಕೆ ಅಭಿನಂದನೆ ಸಲ್ಲಿಸುವುದು—ಇದು ಬಳಕೆದಾರರ ವೇದಿಕೆಯ ವಿಧಾನ.

ಬಳಕೆದಾರರ ಹಕ್ಕು ಜೊತೆಗಾರಿಕೆಗಳ ಬಗ್ಗೆ, ಸಮಸ್ಯೆಗಳ ಬಗ್ಗೆ ಶಿಕ್ಷಣ ನೀಡಲು ವೇದಿಕೆ 'ಬಳಕೆದಾರರ ವೇದಿಕೆ' ಎಂಬ ಹೆಸರಿನ ತಿಂಗಳಿಗೆರಡು ಬಾರಿ ಹೊರಡುವ ಪತ್ರಿಕೆಯನ್ನು ನಡೆಸುತ್ತಿದೆ. (ವಾರ್ಷಿಕ ಚಂದಾ ೧೦ ರೂ; ಆಸಕ್ತರು ಕೆಲವು ಮಾದರಿ ಪ್ರತಿಗಳನ್ನು "ದೀವಟಿಗೆ" ಯಿಂದ ಪಡೆಯಬಹುದು.) ಬಳಕೆದಾರರ ಸಮಸ್ಯೆಗಳ ಬಗೆಗಿನ ಲೇಖನಗಳಷ್ಟೇ ಅಲ್ಲ, ಅವರಿಗೆ ಉಪಯೋಗವಾಗುವ ಇನ್ನಿತರ ಲೇಖನಗಳನ್ನೂ ಪ್ರಕಟಿಸುತ್ತಿದೆ. ಇತರ ಊರುಗಳಲ್ಲಿ ಬಳಕೆದಾರರ ಸಂಘಟನೆಗಳು ರೂಪುಗೊಳ್ಳಲು ಅನುಕೂಲವಾಗುವಂತೆ ತರಬೇತಿ ಶಿಬಿರಗಳನ್ನು ವೇದಿಕೆ ನಡೆಸುತ್ತಿದೆ. ಅನೇಕ ಊರುಗಳಲ್ಲಿ ಬಳಕೆದಾರರ ಸಮಸ್ಯೆಗಳು ಹಾಗೂ ಶಿಕ್ಷಣದ ಬಗ್ಗೆ ವೇದಿಕೆಯ ಸಂಚಾಲಕರು ವಿವರಣಾತ್ಮಕ ಉಪನ್ಯಾಸಗಳನ್ನು ನೀಡಿದ್ದಾರೆ. ಉಡುಪಿಯಲ್ಲಿ ಮೊದಲಾದ ಈ ಬಗೆಯ ವೇದಿಕೆಗಳು ಮಂಗಳೂರು, ಕುಂದಾಪುರ, ವರ್ತೂರು, ಬಸ್ರೂರು ಮುಂತಾದ ಕಡೆ ಸ್ವತಂತ್ರವಾಗಿ ನಲಿಯುತ್ತಿವೆ.

ನಮ್ಮಲ್ಲೂ ಇಂಥ ಸಂಘಟನೆಯೊಂದು ಬೇಕಾಗಿದೆಯಲ್ಲವೆ? ●

> **ಹಕ್ಕಿನ ಬಗ್ಗೆ ಜಾಗೃತಿ**
>
> ಎಲ್ಲಿಯವರೆಗೆ ಬಳಕೆದಾರರು ತಮ್ಮ ಹಕ್ಕನ್ನು ಸಾಧಿಸುವುದಿಲ್ಲವೋ, ಆ ಬಗ್ಗೆ ಜಾಗೃತರಾಗುವುದಿಲ್ಲವೋ, ಅಲ್ಲಿಯವರೆಗೆ ಅವರಿಗಾಗುವ ಈ ಸಾಮೂಹಿಕ ಅನ್ಯಾಯಗಳನ್ನು ನಿವಾರಿಸಬಲ್ಲ ಸುಲಭದ ಯಾವ ದಾರಿಯೂ ಇಲ್ಲ.
>
> —ಡಾ| ಕೆ. ಶಿವರಾಮ ಕಾರಂತ

## ಮುಂದೊಂದು ದಿನವುಂಟು........!

ಏನೆಲ್ಲಾ ಆಸೆ ಹೊತ್ತು
ಜನಿಸಿ ಬಂದವರಿವರು
ಈ ಸಮೃದ್ಧ (?) ಲೋಕಕ್ಕೆ!
ಬಸಿರೊಡೆದು ಭೂಮಿಗೆ
ಕಾಲಿರಿಸಿದ ಕೂಡಲೇ–
ಬೀಳುವರು ಶೋಷಕರ ಖೆಡ್ಡಾದೊಳಕ್ಕೆ.
ಬೆಳೆಯುತ್ತಲೇ ದರ್ಪದಾಳ್ವಿಕೆಗೆ ಅಂಜಿ
ಬಗ್ಗುವರಿವರು ತಮ್ಮ ಶಕ್ತಿಯರಿಯಲ್ಲದೆ.
ತುತ್ತು ಕೂಳಿಗೂ ಹನಿ ರಕ್ತ ತೆತ್ತುಕೊಂಡು
ಬೆಳೆಸುವರು ಆ ಶ್ರೀಮಂತರನು–
ಬೇಡಿಕೆಯು ಚೀತ್ಕಾರವನೆತ್ತದೆ.
ಆವರಿವೆಷ್ಟು ದಿನ ........?
ಮುಂದೊಂದು ದಿನವುಂಟು: ಅಂದು —
ಹೊಳೆವುದಿವರಿಗೆ ಸತ್ಯ ಮಿಂಚಂತೆ.
ಹರಕು ಗುಡಿಸಲೊಳಕ್ಕೆ
ಮಳೆಯ ನೀರಿಳಿವಂತೆ
ಇಳಿಯುತಿರಲು ತಲೆಯೊಳಗೆ
ಬಾಳಿನ ನೂರು ಚಿಂತೆ
ತಮ್ಮ ದುಡಿಮೆಯ ಧಾರೆಯೆ ರಕ್ತ
ಶೋಷಕರಿಗೆ ಲಾಭದ ಒರೆತ
ಹಾವಿನ ಬಾಯೊಳು ಕಪ್ಪೆ ತಾ ಕುಳಿತು
ಹಾರುವ ನೊಣಕ್ಕೆ ಆಸೆ ಪಡುವಂತೆ
ಶ್ರಮಿಕರ ಮಧ್ಯದಲ್ಲಿದ್ದು ತಿಂದು–
ತೇಗುತಿರಲು ಆಳುವವರು ಕೊಬ್ಬಿ
ಕಳಚುವರಿವರು ಬೂರ್ಜ್ವಾಗಳ ಪೊಳ್ಳು ಪೊರೆಯ.

–ಶಿರಿವಾಸೆ ಲೋಕೇಶ್

# ಸಗೋತ್ರ ವಿವಾಹ ಪಾಪವೆ?
## ಹರಿಹರಪುರ ಸ್ವಾಮಿಗಳಿಗೊಂದು ಬಹಿರಂಗ ಪತ್ರ

ಸ್ವಾಮಿ,

ನನ್ನ ಆಪ್ತ ಗೆಳೆಯನೊಬ್ಬನಿದ್ದಾನೆ. ಬಡತನದಲ್ಲಿ ಕಷ್ಟಪಟ್ಟು ಓದಿ, ಎಲ್ಲೆಲ್ಲೋ ಕೆಲಸಮಾಡಿ, ಕಡೆಗೆ, ಒಂದು ಚಿಕ್ಕ ಸಂಸಾರಕ್ಕೆ ಹೊಟ್ಟೆ ಬಟ್ಟೆಗೆ ಕೊರತೆಯಿಲ್ಲದಷ್ಟು ಸಂಬಳ ಬರುವ ಒಂದು ಮರ್ಯಾದಸ್ಥ ಉದ್ಯೋಗ ಸಿಕ್ಕಿತು. ಸ್ವಲ್ಪ ಕಾಲ ನೆಮ್ಮದಿಯಲ್ಲಿದ್ದ. ಅಲ್ಲಿಗೆ ಗ್ರಹಣ ಶುರುವಾಯಿತು ......

ಅವನ ತಂಗಿಗೆ ಮದುವೆ ವಯಸ್ಸು ದಾಟತೊಡಗಿತ್ತು. ವಿಧವೆ ತಾಯಿ ಮಾತ್ರ ಇದ್ದು, ತಂಗಿಗೆ ಗಂಡು ಹುಡುಕುವ ಭಾರ ಇವನಿಗೆ ಬಿತ್ತು. ಆ ಭಾರ ಇವತ್ತು ಸಾಮಾನ್ಯದವನಿಗೆ ಎಂಥ 'ಹೆಣಭಾರ'ವಾಗಿದೆ ಎಂಬುದು ಅನುಭವಿಸಿದವನಿಗೆ ಮಾತ್ರ ಗೊತ್ತಾದೀತು. ಅಂತೂ ಗಂಡು ಹುಡುಕತೊಡಗಿದ. ಹಲವು ಒಳ್ಳೆಯ ಸಂಬಂಧಗಳೂ ಬಂದವು. ಇಷ್ಟೊತ್ತಿಗೆ ಮದುವೆ ಆಗಿಹೋಗಿರಬೇಕಿತ್ತು. ಆದಾಗ ಈತನದೂ ಆಗಿ, ಎರಡು ಬಳ್ಳಿಗಳೂ ಚಿಗುರೊಡೆಯಬೇಕಿತ್ತು. ಆದರೆ....

ಆದರೆ, ಆತನ ವಿಧವೆ ತಾಯಿ ಮಹಾ ಸಂಪ್ರದಾಯಸ್ಥೆ. 'ಸಗೋತ್ರವಿವಾಹವನ್ನು ಮಾಡುವುದಾದರೆ ನನಗಿಷ್ಟು ವಿಷಕೊಟ್ಟು ಆನಂತರ ಮಾಡಿ' ಎಂಬ ಪಲ್ಲವಿಯೊಂದಿಗೆ ಪ್ರಾರಂಭ. ಸಂತತಿ, ಜಾತಿ, ಒಳಜಾತಿ, ರಾಶಿ, ನಕ್ಷತ್ರ, ಮುಹೂರ್ತ-ಇಂತೆ ಅವರ ಪಟ್ಟಿಯ ಎಲ್ಲಾ ಬೇಕು–ಬೇಡ, ಬಹುಮ

(೩ನೇ ಪುಟ ನೋಡಿ)

ಓದುಗರ ಪತ್ರಗಳು

## ಮೂಗು ಕಳಚಿಡಲು ಬರುವಂತಿದ್ದರೆ....

ಅಲ್ಲೊಂದು ಹೋಟೆಲುಂಟು
ಇಲ್ಲೊಂದು ದಾರಿಯುಂಟು
ಆ ದಾರಿಯಲ್ಲಿ ನಾನ್ ಹೋದರೇ
ನನಗೆ ಬರುವುದೂ ಕೊಳಕು ವಾಸನೇ!!

ಎಲ್ಲಿ ಗೊತ್ತೆ?

ಕೊಪ್ಪದ ರಾಜಬೀದಿಯಲ್ಲಿ, ಕರ್ನಾಟಕ ಬ್ಯಾಂಕ ಎದುರು ಚರಂಡಿಯೊಂದು ಹಾದುಹೋಗಿದೆ. ಆ ಚರಂಡಿಯ ಪಕ್ಕದ ಹೋಟೇಲಿನ ಕೊಳಕು ನೀರು ಬಂದು ನಿಂತು ವಾಸನೆ 'ಗಬ್' ಎಂದು ಮೂಗಿಗೆ ಬಡಿಯುತ್ತದೆ. ಅಲ್ಲಿಯೇ ಕೊಪ್ಪದ ಜನರು ಸಂಜೆ ಹೊತ್ತು ಗುಂಪು ಕಟ್ಟಿಕೊಂಡು ನಿಂತು ಮಾತಾಡುತ್ತಾ ಆ 'ಹವಾ' ಸೇವಿಸುತ್ತಾರೆ. ಆದರೆ ಯಾರೂ ಈ ವಾಸನೆ ನಿವಾರಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಸಂಬಂಧಪಟ್ಟವರಿಗೆ ತಿಳಿಸುವುದಿಲ್ಲ. ಬಹುಶಃ ಆ ವಾಸನೆ ಕುಡಿದು ರಕ್ತಹೀನರಾಗಿದ್ದಾರೆಂದೇ ನನ್ನ ಭಾವನೆ.

ಈಚೀಚೆಗೆ ಮಂತ್ರಿಗಳೂ ಕೊಪ್ಪಕ್ಕೆ ಬರುತ್ತಲೇ ಇರುತ್ತಾರೆ; ಆ ವಾಸನೆ ಕುಡಿದೇ ಮುಂದೆ ಹೋಗುತ್ತಾರೆ. ಅವರು ಬರುತ್ತಾರೆಂದಾದರೂ ಆ ವಾಸನೆ ನಿವಾರಣೆಯಾಗುವುದಿಲ್ಲ. ಮೂಗನ್ನು ತೆಗೆದಿಡಲು ಬರುವಂತಿದ್ದರೆ ನಾನಂತೂ ಖಂಡಿತಾ ಪೇಟೆಯಲ್ಲಿ ಓಡಾಡುವಾಗ ಮೂಗನ್ನು ಮನೆಯಲ್ಲಿಟ್ಟು ಬರುತ್ತಿದ್ದೆ.

ಈ ಚರಂಡಿಯ ಮೋರಿಗೆ ಪುರಸಭೆಯವರು ಕಲ್ಲು ಚಪ್ಪಡಿ ಮುಚ್ಚಿಸಿದರಾದರೂ ವಾಸನೆ ನಿಲ್ಲುತ್ತಿತ್ತೇನೋ. ಆದರೆ ಅವರ ಗಮನ ಇತ್ತ ಕಡೆ ಹರಿದಂತಿಲ್ಲ.

ಇಂಥದೇ ಇನ್ನೊಂದು ಗಬ್ಬು ಮೋರಿ ಬಸ್‌ಸ್ಟ್ಯಾಂಡ್ ಬಳಿ ಜ್ಯೋತಿ ಕ್ಲಿನಿಕ್‌ನ ಎದುರಿಗಿದೆ. ಸಂಜೆಯಂತೂ ಇಲ್ಲಿಂದ ಇಡೀ ರಸ್ತೆಯುದ್ದಕ್ಕೂ ಚರಂಡಿ ನಾರುತ್ತಿರುತ್ತದೆ.

ಪುರಸಭೆಯವರು, ಪ್ರತಿನಿಧಿಗಳು ಪತ್ರಿಕೆಯಲ್ಲಿ ನೋಡಿಯಾದರೂ ಈ ಕಡೆ ಗಮನ ಹರಿಸಿಯಾರೆಂದು ಆಶಿಸುತ್ತೇನೆ.

ಕೊಪ್ಪ. —ಎಂ. ಎಸ್ ಲಕ್ಷ್ಮೀನಾರಾಯಣ

## ........ತಿಥಿ?

ಅಯ್ಯೋ ದೇವರೆ, ಇದೇನಪ್ಪ ಸಿನ್ ಕರ್ಮ? ಏನೋ ನಾಕು ಜನಾ ಸೇರ್ಕೊಂಡು ಒಂದು ಉತ್ಸವೋ, ಹಬ್ಬಾನೋ, ಜಯಂತಿನೋ ಮಾಡ್ತಾ ಇದ್ರೆ ಅದಕ್ಕೂ ಕಲ್ಲಾಕ್ತೀರ್ಯಲ್ಲಪ್ಪ. ಎಲ್ಲಾ ಮುಚ್‌ಗ್ಕೊಂಡು ಹೊಟ್ಟೆ ಪಾಡು ಮಾಡ್ಕೊ ನಮ್ ಸುಬ್ರಮುಕ್ಕೂ ನೀನು ಹೊಟ್ಟೆ ಬರಿಯೋನ ಆಟದ ಕಾಪಾಗಿ ಹೀಗ್ಯಾಕ್ ಮಾಡ್ತೀಯಾ? ಹೀಂಗೇ ಆಗ್ತಾ ಇದ್ರೆ, ದೇವ್ರೇ, ನೋಡ್ತಾ ಇರು, ನಿನ್ನ ಹಬ್ಬಾ ಮಾಡೋದ್ಬಿಟ್ಟು ಬಡೋರೆಲ್ಲ ಸೇರ್ಕೊಂಡು ಒಂದ್ ದಿನಾ ನಿನ್ ತಿಥಿ ಮಾಡ್ಬಿಡ್ತೀವಿ!

ಶೃಂಗೇರಿ —ಗುಂಡಪ್ಪ.

## ವಿದ್ಯಾ ಇಲಾಖೆಯ ಈ ಮುಸಿಪಟ್ಟಿ

ನ. ರಾ. ಪುರ: ಈ ತಾಲೂಕಿನ ಸೆಟ್ಟಿಕೊಪ್ಪ ಶಾಲೆಯ ಅಧ್ಯಾಪಕರೊಬ್ಬರು ಕಳೆದ ನವೆಂಬರಿನಲ್ಲಿ ತಮ್ಮ ಮುಖ್ಯೋಪಾಧ್ಯಾಯರಾದ ಗಣಪತಿ ಎಂಬುವರ ಮೇಲೆ ಹಲ್ಲೆ ಮಾಡಿದರು. ಪೋಲೀಸಿಗೆ ದೂರು ಹೋಗಿ, ಆತನ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲಾಯಿತು. ಕ್ರಿಮಿನಲ್ ಪ್ರಕರಣಕ್ಕೆ ಒಳಗಾದ ಸರ್ಕಾರಿ ನೌಕರನನ್ನು ತಕ್ಷಣ ಅಮಾನತ್ತು ಮಾಡಿ ಇಲಾಖಾ ಕ್ರಮ ಜರುಗಿಸಬೇಕು—ಇದು ಕಾನೂನು. ಇಲ್ಲಿ ಹಾಗಾಗಲಿಲ್ಲ. ಆಗಿನ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿಗಳೇ ಈ ಬಗ್ಗೆ ಲಿಖಿತವಾದ ವರದಿ, ಶಿಫಾರ್ಸು ಮಾಡಿದ್ದರೂ ಚಿಕ್ಕಮಗಳೂರಿನ ಡಿ. ಡಿ. ಪಿ. ಐ ರವರು ಹಲ್ಲೆಗೊಳಗಾದ ಗಣಪತಿಯವರನ್ನೇ ಬೇರೆ ಕಡೆಗೆ ವರ್ಗ ಮಾಡಿಸಿದರು. ಕೇಳಿದರೆ ಹೇಳುತ್ತಾರಂತೆ—'ಏನು ಮಾಡೋಣ ಸಾರ್. ಅವನ ಮೇಲೆ ಕ್ರಮ ತೆಗೆದುಕೊಳ್ಳಬಾರದೆಂದು ಮೇಲಿನಿಂದ ಒತ್ತಡ ಇದೆ.' ಅಂತ

ಕೆಲವೇ ಸಮಯದ ಹಿಂದೆ ಈತ ಸಹಾಯಕ ಉಪಾಧ್ಯಾಯನಿಯೊಬ್ಬರ ಮೇಲೂ ಹಲ್ಲೆ ನಡೆಸಿದ್ದರು. ಆಗಲೂ ಡಿಡಿಪಿಐಗೆ ದೂರು ಕೊಟ್ಟರೂ ಏನೂ ಪ್ರಯೋಜನವಾಗಿರಲಿಲ್ಲ. ಹಿಂದೆ ಬೇಗಾರಿನಲ್ಲೂ ಈತ ಸಹೋದ್ಯೋಗಿಗೆ ಹೊಡೆದು, ಪೋಲಿಸ್ ಕೇಸ್ ಆಗಿ ಅದನ್ನು ಮುಚ್ಚಿ ಹಾಕಲಾಗಿತ್ತು ಎಂದು ಹೇಳಲಾಗಿದೆ.

### ಮುಸಿಪಟ್ಟಿ ಫ್ಯಾಶನ್?

ಈ ಮುಸಿಪಟ್ಟಿಯನ್ನು ಮುಖದ ಮೇಲೆ ಹೊತ್ತು ತಿರುಗುತ್ತಿರುವವರು ಯಾರು? ಅವರು ಅದನ್ನು ಅವನ್ನು ಬೇಗ ಒರೆಸಿಕೊಂಡಷ್ಟೂ ಅವರಿಗೇ ಒಳ್ಳೆಯದೆಂದು ತಿಳಿದವರು ಹೇಳುತ್ತಿದ್ದಾರೆ. ಆದರೆ ಮುಖದ ಮೇಲೆ ಮುಸಿಪಟ್ಟಿಯೇ ಈಗ ಫ್ಯಾಶನ್ ಆಗಿದ್ದರೆ?

ಹೊಡೆಸಿಕೊಂಡ ವ್ಯಕ್ತಿಯೇನೂ ಸತ್ಯಹರಿಶ್ಚಂದ್ರನಲ್ಲದಿರಬಹುದು. ಆದರೂ ಹೀಗೆ ಕಂಡವರಿಗೆಲ್ಲ ಹೊಡೆದು 'ಬುದ್ಧಿ' ಕಲಿಸಕ್ಕೆ ಹೊಡೆಯುವವನ ಯೋಗ್ಯತೆ ಎಂಥದು? ಅಲ್ಲದೆ ಇದಕ್ಕಾಗಿ ಬೇರೆ ನ್ಯಾಯಸಮ್ಮತ ಮಾರ್ಗಗಳೂ ಇವೆಯಲ್ಲವೆ? ಎಂದು 'ಗೊತ್ತು' ನ್ಯಾಯಪ್ರಿಯರು ಕೇಳುತ್ತಾರೆ.

## ತಾಳೆಯೆಣ್ಣೆ ಹಂಚಿಕೆ ಸದ್ಯವೇ ಮಾಮೂಲಾಗುವ ನಿರೀಕ್ಷೆ

ಕೊಪ್ಪ: ಈಗ್ಗೆ ನಾಲ್ಕೈದು ತಿಂಗಳಿಂದ ಜಿಲ್ಲೆಯಲ್ಲಿ ನಿಂತು ಹೋಗಿದ್ದ ತಾಳೆ (ಪಾಮ್) ಎಣ್ಣೆ ಸರಬರಾಜು ಪುನಃ ಪ್ರಾರಂಭವಾಗಿದ್ದು, ಹಂಚಿಕೆ ಸದ್ಯದಲ್ಲೇ ಮಾಮೂಲಾಗುವುದೆಂದು ತಿಳಿದು ಬಂದಿದೆ.

'ಹಲವಾರು ತಿಂಗಳಿಂದ ಪಾಮ್ ಎಣ್ಣೆ ಬಂದಿಲ್ಲ' ಎಂದು 'ದೀವಟಿಗೆ'ಗೆ ಬಂದ ದೂರಿನ ಎಳೆ ಹಿಡಿದು ಸಂಬಂಧಪಟ್ಟವರಲ್ಲಿ ವಿಚಾರಿಸಿದಾಗ ಹೀಗೆ ತಿಳಿದು ಬಂತು.

ನ. ರಾ. ಪುರ, ಶೃಂಗೇರಿಗೆ ಕಳೆದ ತಿಂಗಳು ಸ್ವಲ್ಪ ಸರಬರಾಜಾಗಿದೆ. ಕೊಪ್ಪಕ್ಕೆ ಮಂಜೂರಾದ ೨ ಸಾವಿರ ಕಿಲೊ (೨ ಟನ್) ಎಣ್ಣೆ ಸಂಬಂಧಪಟ್ಟ ಟಿಪೋದ ಗುಮಾಸ್ತರ ರಜೆ ಕಾರಣ ಬಂದಿಲ್ಲವೆಂದೂ ಈ ಬಾರಿ ೧೫೦೦ ಕಿಲೊ ಮಂಜೂರಾಗಿದ್ದು ಇಷ್ಟರಲ್ಲೇ ಹಂಚಿಕೆಗೆ ದೊರೆಯಲಿದೆಯೆಂದೂ ತಿಳಿದು ಬಂದಿದೆ.

### ಬಹಿರಂಗ ಪತ್ರ

(೨ನೇ ಪುಟದಿಂದ)

—ಬಾರದುಗಳನ್ನು ದಾಟಬೇಕಾದರೆ.... ಈಗ ಐದಾರು ವರ್ಷದಿಂದ ಆ ನಿರ್ಭಾಗ್ಯ ಅಣ್ಣನ ನಿರ್ಭಾಗ್ಯ ತಂಗಿಗೆ ಬಂದ ಹತ್ತಿಪ್ಪತ್ತರಲ್ಲಿ ಒಂದು ಗಂಡೂ ತಾಳೆಯಾಗಲಿಲ್ಲ. ಅಂತೂ ಆ ಧರ್ಮನಿಷ್ಠೆ ತಾಯಿಯದು ಒಂದೇ ಹಟ - ಅಷ್ಟರ ಕಲಿಯುದಿದ್ದರೂ ಆಡ್ಡಿ ಇಲ್ಲ; ಜೀವನೋಪಾಯಕ್ಕೆ ಸರಿಯಾದ ದಾರಿಯಿಲ್ಲದೆ ಬೇಡಿ ಗಂಜಿ ಉಂಡರೂ ಪರವಾಗಿಲ್ಲ, ಸಂಪ್ರದಾಯ ಮೀರಿ ನಡೆಯುವ ಮದುವೆ ತಾನಿರುವವರೆಗೆ ಸಾಧ್ಯವಿಲ್ಲ.

ನನ್ನ ಗೆಳೆಯನಿಗೂ ಮೂವತ್ತರ ಅಂಚು. ಆತನಿಗೂ ಮದುವೆಯಾಗಿ, ಜೀವನದ ಅತ್ಯಂತ ಮಧುರವಾಗಬೇಕಾಗಿದ್ದ ದಿನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ಚಿಂತೆ, ನೋವು, ಜಿಗುಪ್ಸೆಯಲ್ಲಿಯೇ ಕಳೆದಿವೆ. ಇನ್ನೂ ಎಷ್ಟು ಕಾಲ ಅವನೂ ತಡೆದುಕೊಳ್ಳಬಲ್ಲ ಎಂಬುದನ್ನು ಸಂಸಾರಿಯಾಗುವ ಅಪೇಕ್ಷೆಯಿರುವ ಯಾರಾದರೂ ಊಹಿಸಬಹುದು.

ಕಡೆಗೊಮ್ಮೆ ಅವನು ಹುಚ್ಚನಾಗುವುದೋ, ಆತ್ಮಹತ್ಯೆಗೆಳಸುವುದೋ ಅಥವಾ ಬದುಕಲೇಬೇಕೆನ್ನುವ ಆದಮ್ಯ ಕೆಚ್ಚಿದ್ದರೆ ಸಮಾಜದ ದೃಷ್ಟಿಯಲ್ಲಿ ಅಧರ್ಮಿ ಎನ್ನಿಸಿಕೊಳ್ಳುವುದೋ ಒಂದು ಕಡೆ; ಇದಕ್ಕೆಲ್ಲ ತಾನು ಕಾರಣ ಎಂದು (ನಂಬಿಯೋ ನಂಬದೆಯೋ—) ಆ ಮುಗ್ಧ ಹೆಣ್ಣು ಕೆರೆ-ಬಾವಿ ಕಾಣುವುದು ಇನ್ನೊಂದು ಕಡೆ-ನೇಣಾದರೆ ಊಟ ಹಿತಗೆಡುತ್ತದೆ.

ಇಂಥ ಎಷ್ಟು ನಿರ್ಭಾಗ್ಯ ಅಣ್ಣ-ತಂಗಿಯರು, ಅಕ್ಕ-ತಮ್ಮಂದಿರು ನಮ್ಮಲ್ಲಿ ನರಳಿಹೋಗುತ್ತಿದ್ದಾರೋ! ಅದಕ್ಕಾಗಿಯೇ, ನಿಮ್ಮ ಪ್ರಭಾವ ಈ ಭಾಗದಲ್ಲಿ ಕನಿಷ್ಠ ಪಕ್ಷ ಬ್ರಾಹ್ಮಣರಲ್ಲಾದರೂ, ವ್ಯಾಪಕವಾಗಿರುವುದರಿಂದ ಈ ಕೆಲವು ಅನುಮಾನಗಳಿಗೆ ಎಲ್ಲರಿಗೂ ಅರ್ಥವಾಗುವ ಉತ್ತರ ಕೊಡಬೇಕೆಂದು ವಿನಂತಿಸುತ್ತೇನೆ:

೧) ಸಗೋತ್ರ ವಿವಾಹ ಧರ್ಮ ವಿರೋಧಿಯೇ?

೨) ಮದುವೆಗೆ ಸಂಬಂಧಪಟ್ಟಂತೆ ಯಾವುದು ಧರ್ಮ? ಸಮಾಜ ದಿನದಿನವೂ ಕ್ರೂರವಾಗುತ್ತಿರುವಾಗ ಬಿಗುಡಿದ ಅಂಟಬೇಕಾದ ಜೀವಗಳು ಮುರುಟಿ ಹೋದರೆ ಆ ಹತ್ಯೆಯ ಜವಾಬ್ದಾರಿ ಯಾರದು?

೩) ನನ್ನ ಗೆಳೆಯನ ತಾಯಿ ಪ್ರಾಮಾಣಿಕವಾಗಿ ಧರ್ಮವೆಂದು ನಂಬಿರುವ ಆಚರಣೆಯೊಂದರಿಂದ ನನ್ನ ನಿರ್ಭಾಗ್ಯ ಗೆಳೆಯ ಮತ್ತು ತಂಗಿ ಕೆಟ್ಟರೆ ಅಥವಾ ಸತ್ತರೆ ಅದರ ಹೊಣೆ ಯಾರದು—ಆ ಆಚಾರವೋ ಧರ್ಮಧೀರರು ತಾವೋ?

೪) ಎಲ್ಲಕ್ಕಿಂತ ಮುಖ್ಯವಾಗಿ, ಯಾವುದೋ ಕಾಲದಲ್ಲಿ ಏನೋ ಅರ್ಥವಿದ್ದ ಒಂದು ಸಂಪ್ರದಾಯವನ್ನು ಸಮಾಜ ಸಾವಿರಾರು ವರ್ಷಗಳಷ್ಟು ಮುಂದುವರಿದ ಬಳಿಕ ಲಾದ ಮೇಲೂ ಅನುಸರಿಸುವುದರಲ್ಲಿ ಗಂಭೀರವಾದ ಅರ್ಥವಿದೆಯೇ?

ಈ ಎಲ್ಲ ಗೊಂದಲಗಳಿಗೆ ಸ್ಪಷ್ಟವಾಗಿ, ಅನುಮಾನಕ್ಕೆ ಅವಕಾಶ ವಿಲ್ಲದಂತೆ 'ದೀವಟಿಗೆ'ಯ ಮೂಲಕ ಉತ್ತರ ಕೊಡಬೇಕೆಂದು ವಿನಂತಿ. ಈ ಪತ್ರ ಬರೆಯುವ ನನ್ನ ಉದ್ದೇಶವನ್ನು ಗುರುತಿಸಿ, ಅಹಂಕಾರವೆಂದು ತಿಳಿಯದೆ ಆದಷ್ಟು ಬೇಗ ಉತ್ತರ ಬರೆಯುತ್ತೀರೆಂದು ನಂಬಿದ್ದೇನೆ.

ವಂದನೆಗಳೊಂದಿಗೆ,

—ಸಿರಿಮನೆ ನಾಗರಾಜ್,
ಸಂಪಾದಕ,
'ದೀವಟಿಗೆ' ವಾರಪತ್ರಿಕೆ,
ಕೊಪ್ಪ.

ಓದುಗರೆ,

ಮೇಲಿನಂಥ ಎಷ್ಟೋ ಸಮಸ್ಯೆಗಳನ್ನು ನೀವು ಕಂಡಿರಬಹುದು, ಕೇಳಿರಬಹುದು, ಅನುಭವಿಸಿರಬಹುದು. ಅಂಥವುಗಳ ಬಗ್ಗೆ ಯಾರೂ ಪ್ರಶ್ನೆ ಮಾಡದೆ, ವಿಮರ್ಶಿಸದೆ, ಅವು ಧರ್ಮದ ಹೆಸರಿನಲ್ಲಿ ಎಷ್ಟೋ ಕೊರಗುಗಳಿಗೆ ಕಾರಣವಾಗಿರಬಹುದು. ಅವುಗಳನ್ನು ಕುರಿತು, ವ್ಯಾಪಕವಾಗಿಯೂ ಮತ್ತು ಸ್ವತಂತ್ರವಾಗಿಯೂ ಚರ್ಚೆ ನಡೆಯಬೇಕಾದ ಅಗತ್ಯವಿದೆ. ಅಂಥ ವಿಮರ್ಶೆ ನಡೆಯುವ ಉದ್ದೇಶ ನಿಮಗಿದ್ದರೆ 'ದೀವಟಿಗೆ' ನಿಮಗೆ ಅವಕಾಶ ಕಲ್ಪಿಸುತ್ತದೆ. ಪ್ರೋತ್ಸಾಹ ಕೊಡುತ್ತದೆ. ಬರೆಯಿರಿ. — ಸಂಪಾದಕ.

## ಅವಳಿ ಕರುಗಳ ಜನನ

(ವರದಿ: ಹೆಚ್. ಎಂ. ಗೋಪಾಲ್)

ಹರಿಹರಪುರ: ಇಲ್ಲಿಗೆ ಸಮೀಪದ ಬೊಮ್ಲಾಪುರ ಗ್ರಾಮದ ಮೇಣಸೂರಿನಲ್ಲಿ ಹಸುವೊಂದು ಒಂದೇ ದಿನ ೨ ಕರುಗಳಿಗೆ ಜನ್ಮವಿತ್ತಿದೆ.

ದುಗ್ಗಪ್ಪ ಎಂಬುವವರು ಈಚೆಗೆ ಕೊಂಡು ತಂದ ಈ ಕನ್ನೆಮಣಕ ಏ.೨೦ರಂದು ಹಡೆದಿರುವ ಎರಡೂ ಹೋರಿಕರುಗಳಾಗಿದ್ದ, ಆರೋಗ್ಯವಾಗಿವೆ. ಒಂದೇ ದಿನ ಕೇವಲ ೧೦ ನಿಮಿಷಗಳ ಅಂತರದಲ್ಲಿ ಎರಡು ಕರುಗಳೂ ಜನಿಸಿವೆ.

ಸಣ್ಣ ರೈತರಾಗಿರುವ ದುಗ್ಗಪ್ಪ, ಎಳ್ದಂ ಜೋಡೆತ್ತು ಕಟ್ಟಿ ಹೂಟಿ, ಗಾಡಿ ಮಾಡುವ ಕನಸುಗಳನ್ನು ಕಾಣುತ್ತಿದ್ದಾರೆ ಬಹುದು ಯಾರೋ ತಮಾಷೆಗೆ ಹೇಳಿದ ಮಾತಂತೆ, ಅಷ್ಟೆ. ಆದರೆ ಒಂದು ವೇಳೆ ಹಾಗೆ ಮಾಡಬೇಕಾದರೂ ಅಣ್ಣ—ತಮ್ಮಗಳನ್ನು ಒಂದೇ ಜೋಡಿಗೆ ಕಟ್ಟಬಾರದೆನ್ನುವ (ಗೊತ್ತು) 'ಶಾಸ್ತ್ರ' ಬಿಡಬೇಕಲ್ಲ!

## ಅತ್ತಿಕುಡಿಗೆ ಕಾಫಿ ತೋಟದಿಂದ

# ಮೈನರ್ ಹುಡುಗಿ ಅಪಹರಣ; ಎಲ್ಲ ಆರೋಪಿಗಳ ಬಂಧನ

ಜಯಪುರ: ಇಲ್ಲಿಗೆ ಸಮೀಪದ ಅತ್ತಿಕುಡಿಗೆಯ ಸೈಂಟ್ ಅಂತೋಣಿ ಎಸ್ಟೇಟ್‌ನಿಂದ ಲಲಿತ ಎಂಬ ಸುಮಾರು ೧೭ ವರ್ಷದ ಹುಡುಗಿಯನ್ನು ಅಜಿಮಾ ಎಂಬುವವನು ಶೀನ, ನಾರಾಯಣ, ಅಬುಬಕರ್ ಮತ್ತು ಪಾಸ್ಕಲ್ ಎಂಬುವವರ ಸಹಾಯದಿಂದ ಮಾ. ೨೩ ರಂದು ಅಪಹರಿಸಿಕೊಂಡು ಹೋಗಿ, ಶೀಲಗೆಡಿಸಿ, ಚಿಕ್ಕಮಗಳೂರಿನ ಅರಂಕಲ್ ಎಸ್ಟೇಟಿನಲ್ಲಿ ಇಟ್ಟುಕೊಂಡಿದ್ದನೆಂದೂ, ಎಲ್ಲ ಐವರು ಆರೋಪಿಗಳನ್ನೂ ಏ. ೧೧ ರಂದು ಶೃಂಗೇರಿ ಪೋಲೀಸರು ಪತ್ತೆ ಹಚ್ಚಿ, ಬಂಧಿಸಿ ನ್ಯಾಯಾಂಗ ಬಂಧನದಲ್ಲಿಟ್ಟಿದ್ದಾರೆಂದೂ ಶೃಂಗೇರಿ ಪೋ. ಸಬ್ ಇನ್ಸ್‌ಪೆಕ್ಟರ್ ಹೆಚ್. ಎಸ್. ಅಶ್ವತ್ಥನಾರಾಯಣರಾವ್ ತಿಳಿಸಿದ್ದಾರೆ. ಹುಡುಗಿಯನ್ನು ಶಿವಮೊಗ್ಗದ ರಕ್ಷಣಾ ಗೃಹಕ್ಕೆ ಕಳಿಸಲಾಗಿದೆ. ಆಕೆಯ ತಂದೆ ಸದರಿ ಕಾಫಿ ತೋಟದಲ್ಲಿ ಕೂಲಿ ಮಾಡುತ್ತಿದ್ದರೆಂದು ತಿಳಿದು ಬಂದಿದೆ.

### ಸಜಾ

ಬಾಳೆಹೊನ್ನೂರು ಸಮೀಪದ ದೇವಗೋಡು ಬಳಿ ೧೯೮೦ರ ಏ. ೧೦ ರಂದು ಮೋಟಾರ್ ಸೈಕಲ್‌ಗೆ ಲಾರಿ ಡಿಕ್ಕಿ ಹೊಡೆಸಿ ಸಂಜೀವ ಶೆಟ್ಟಿ ಎಂಬುವವರ ಸಾವಿಗೆ ಕಾರಣನಾಗಿದ್ದ ಲಾರಿ ಚಾಲಕ ಮಹಮದ್ ಇಸಾಕ್ ಎಂಬುವವನಿಗೆ ನ. ರಾ. ಪುರ ಪ್ರಥಮ ದರ್ಜೆ ನ್ಯಾಯಾಧೀಶರು ೬ ತಿಂಗಳ ಸಜೆ ಹಾಗೂ ೫೦೦ರೂ. ದಂಡ ವಿಧಿಸಿ ತೀರ್ಪಿತ್ತಿದ್ದಾರೆ.

ಶೃಂಗೇರಿ ಠಾಣಾಧಿಕಾರಿ ಹೆಚ್. ಎಸ್. ಅಶ್ವತ್ಥ ನಾರಾಯಣ ರಾವ್ ಮೊಕದ್ದಮೆ ಹೂಡಿದ್ದರು.

## ತಾ॥ ಯುವ ಕಾಂಗ್ರೆಸ್ ಸಭೆ

ಕೊಪ್ಪ: ಯುವ ಕಾಂಗ್ರೆಸ್ ತಾ॥ ಸಮಿತಿ ಸಭೆ ಏ. ೧೪ರಂದು ಇಲ್ಲಿನ ಪುರಭವನದಲ್ಲಿ ನಡೆಯಿತು. ಹೆಚ್. ಎಂ. ಶ್ರೀಧರ್ ಅಧ್ಯಕ್ಷತೆ ವಹಿಸಿದ್ದರು.

ತಾಲೂಕಿನ ಅಂಗವಿಕಲರನ್ನು ಗುರ್ತಿಸಿ ಅವರಿಗೆ ಮಾಸಾಶನ ಒದಗಿಸಲು ಕೊಪ್ಪದಲ್ಲಿ ಅಂಗವಿಕಲರ ಶಿಬಿರ ಏರ್ಪಡಿಸಬೇಕೆಂದೂ, ತಾಲೂಕಿನಲ್ಲಿ ಬಡ ಜನರ ಕುಂದು ಕೊರತೆಗಳ ಬಗ್ಗೆ ಗಮನ ಹರಿಸಬೇಕೆಂದೂ ಸಭೆಯಲ್ಲಿ ತೀರ್ಮಾನಿಸಲಾಯಿತು.

## ಶೃಂಗೇರಿ, ನ. ರಾ. ಪುರಗಳಲ್ಲಿ ಉದರದರ್ಶಕ ಸಂತಾನಹರಣ ಶಸ್ತ್ರಚಿಕಿತ್ಸೆ ಶಿಬಿರಗಳು

ಶೃಂಗೇರಿ: ಇಲ್ಲಿನ ಜೆ. ಸಿ. ಬಿ.ಎಂ. ಕಾಲೇಜಿನ ಆವರಣದಲ್ಲಿ ಏ. ೨೨ ರಂದು ಉದರ ದರ್ಶಕ (ಲ್ಯಾಪ್ರೊಸ್ಕೊಪಿಕ್) ಸಂತಾನಹರಣ ಶಸ್ತ್ರ ಚಿಕಿತ್ಸಾ ಶಿಬಿರ ಏರ್ಪಟ್ಟಿದೆ.

ನ.ರಾ. ಪುರದ ಸರ್ಕಾರಿ ಆಸ್ಪತ್ರೆಯಲ್ಲಿ ಏ. ೨೪ ರಂದು ಇಂಥದೇ ಶಿಬಿರ ನಡೆಯುತ್ತದೆ.

ಈ ವಿಧಾನ ಸಂತಾನಹರಣ ಶಸ್ತ್ರ ಚಿಕಿತ್ಸೆಯ ಅತ್ಯಂತ ಸುಲಭ ವಿಧಾನವಾಗಿದ್ದು, ಅರ್ಹ ಮಹಿಳೆಯರು ಪೂರ್ಣ ಪ್ರಯೋಜನ ಪಡೆದುಕೊಳ್ಳಬೇಕೆಂದು ಕುಟುಂಬ ಕಲ್ಯಾಣ ಸಮಿತಿ ಅಧ್ಯಕ್ಷರುಗಳು ಕೋರಿದ್ದಾರೆ.

## ನ. ರಾ. ಪುರ ಯುವತಿ ಕೊಲೆ

# ಆಪಾದಿತನ ಬಂಧನ

ನ. ರಾ. ಪುರ: ಚಿಕ್ಕಂದೂರು ಬಳಿ ಯುವತಿಯ ಕೊಲೆ ಆಪಾದಿತ ಕೊಲ್ಲೆಮನೆ ದಿವಾಕರ (೨೫) ಎಂಬುವವನ ದಸ್ತಗಿರಿಯಾಗಿದೆ. ಆತನನ್ನು ಚಿಕ್ಕಮಗಳೂರು ನ್ಯಾಯಾಲಯದಲ್ಲಿ ಹಾಜರುಪಡಿಸಿ ನ್ಯಾಯಾಂಗ ಸುಪರ್ದಿಗೆ ಕೊಡಲಾಗಿದೆ.

ಯುವತಿಯ (ಸರೋಜಾ) ಮೇಲೆ ಬಲಾತ್ಕಾರ ಮಾಡಲು ದಿವಾಕರ ಯತ್ನಿಸಿದಾಗ ಆಕೆ ಒಪ್ಪದೆ ಕಪಾಳ ಮೋಕ್ಷ ಮಾಡಿದಳೆಂದೂ, ಸಿಟ್ಟಿಗೆದ್ದ ದಿವಾಕರ ದೊಣ್ಣೆಯಿಂದ ಆಕೆಯನ್ನು ಬಡಿದು ಕೊಂದನೆಂದೂ ಪೋಲೀಸರು ತಿಳಿಸಿದ್ದಾರೆ. ಆರೋಪಿ ತಪ್ಪೊಪ್ಪಿಕೊಂಡಿದ್ದಾನಂತೆ.

### ಒದೆತದಿಂದ ಸಾವು

ಇಲ್ಲಿಗೆ ಸಮೀಪದ ಸೂಸಲವಾನಿ ಎಂಬಲ್ಲಿ ಏ. ೧೨ ರಂದು ಈಶ್ವರ ಮತ್ತು ಡೇವಿಡ್ ಎಂಬ ಯುವಕರ ನಡುವೆ ಜಗಳವಾಗಿ, ಡೇವಿಡ್‌ನ ಮರ್ಮಾಂಗಕ್ಕೆ ಒದೆತ ಬಿದ್ದ ಪರಿಣಾಮವಾಗಿ ರಾತ್ರಿ ಆಸ್ಪತ್ರೆಗೆ ಸೇರಿಸಲ್ಪಟ್ಟು, ಮರುದಿನ ಶಿವಮೊಗ್ಗ ಆಸ್ಪತ್ರೆಗೆ ಒಯ್ದರೂ ಉಪಯೋಗವಾಗದೇ ಆತ ೧೫ ರಂದು ಮರಣ ಹೊಂದಿದ್ದಾನೆ. ನ. ರಾ. ಪುರ ಪೋಲೀಸರು ಪ್ರಕರಣ ದಾಖಲು ಮಾಡಿಕೊಂಡು ಈಶ್ವರನನ್ನು ಬಂಧಿಸಿ ಮುಂದಿನ ಕ್ರಮ ತೆಗೆದುಕೊಂಡಿದ್ದಾರೆ.

### ಗನ್ ಶಾಟ್ ದುರ್ಮರಣ

ಇದೇ ತಾಲೂಕಿನ ಮಲ್ಲಂದೂರು ಬಳಿ ಹಂಪಿನಮನೆ ಎಂಬಲ್ಲಿ ಸೀನ ಎಂಬಾತ ಕೋವಿ ಹಿಡಿದು ಕಾಡಿನಲ್ಲಿ ಹೋಗುತ್ತಿದ್ದಾಗ ಅಕಸ್ಮಾತ್ ಕೋವಿಯಿಂದ ಹಾರಿದ ಗುಂಡು ಗಲ್ಲದ ಬದಿ ಹೊಕ್ಕು ಹುಬ್ಬಿನ ಹತ್ತಿರ ಹೊರಟು ಆತ ಸ್ಥಳದಲ್ಲೇ ಮೃತಪಟ್ಟಿದ್ದು, ನ. ರಾ. ಪುರ ಪೋಲೀಸರು ಮಹಜರು ನಡೆಸಿದರು.

# ವಾರ್ಷಿಕೋತ್ಸವಗಳು

### ಮತ್ತಾವನಿ ಯುವಕ ರೈತ ಸಂಘ

(ವರದಿ: ಕೆ. ಎಸ್. ಜಗದೀಶ)

ಹರಿಹರಪುರ ಗ್ರಾಮದ ಮತ್ತಾವನಿಯ ರಾಘವೇಂದ್ರ ಯುವಕ ರೈತ ಸಂಘದ ಮೊದಲ ವಾರ್ಷಿಕೋತ್ಸವ ಏ. ೧೫ ರಂದು ಗ್ರಾಮ ಪಂಚಾಯತಿ ಅಧ್ಯಕ್ಷ ಜೆ. ಪಿ. ನೀಲಕಂಠಭಟ್ಟರ ಅಧ್ಯಕ್ಷತೆಯಲ್ಲಿ ನಡೆಯಿತು.

ಊರಿನಲ್ಲಿ ಒಂದು ಮಹಿಳಾ ಸಮಾಜ ಸ್ಥಾಪಿಸಿಕೊಂಡು ಮಹಿಳೆಯರು, ಒಗ್ಗಟ್ಟಾಗಬೇಕೆಂದು ಅಧ್ಯಕ್ಷರು ಕರೆ ನೀಡಿದರು.

ತಾ. ಅ. ಮಂ. ಸದಸ್ಯ ಎಂ. ಶ್ರೀನಿವಾಸ್ ಮಾತನಾಡಿ, ಒಗ್ಗಟ್ಟಾಗಿದ್ದರೆ ಯಾವ ಅಧಿಕಾರಿಯ ಹಂಗಿಲ್ಲ. ಆದ್ದರಿಂದ ಊರ ಜನರು ಒಗ್ಗಟ್ಟಾಗಿರಬೇಕು ಎಂದು ಕರೆಕೊಟ್ಟರು.

ಎಸ್. ವಿ. ಪದ್ಮನಾಭ ಸ್ವಾಗತಿಸಿದರು. ಶ್ರೀನಿವಾಸ್ ವರದಿ ಓದಿದರು. ಎನ್. ಪಿ. ಚಂದ್ರಶೇಖರ್ ವಂದಿಸಿದರು.

ಸಂಘದ ಸದಸ್ಯರಿಂದ 'ಚಿನ್ನದಗೊಂಬೆ' ನಾಟಕ, ಹಾಗೂ ಕೊಪ್ಪದ ಸಂಗೀತ್ ಮೆಲೊಡೀಸ್ ಮಿತ್ರ ಮಂಡಳಿಯಿಂದ ಆರ್ಕೆಸ್ಟ್ರಾ ಮತ್ತು 'ಭಕ್ತದ ಕಾಳು' ಎಂಬ ನಾಟಕ ನಡೆದವು.

### ಅದ್ದಡ ಶಾಲೆ

ಇಲ್ಲಿನ ಹಿ. ಪ್ರಾ. ಶಾಲೆಯ ವಾರ್ಷಿಕೋತ್ಸವ ಏ. ೯ ರಂದು ಬಿ. ಜಿ. ಚಿದಂಬರ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಶಾಲಾ ತನಿಖಾಧಿಕಾರಿ ಎನ್. ಆರ್. ಶ್ರೀನಿವಾಸ್ ಮುಖ್ಯಅತಿಥಿಗಳಾಗಿದ್ದರು. ಕೊಪ್ಪ ಗ್ರಾಮ ಪಂಚಾಯಿತಿ ಅಧ್ಯಕ್ಷ ರಾಮಮೋಹನ್ ಬಹುಮಾನ ವಿತರಣೆ ಮಾಡಿದರು. ಶಾಲಾ ಮುಖ್ಯೋಪಾಧ್ಯಾಯ ಧೂಮಪ್ಪ ಎಲ್ಲರಿಗೂ ವಂದಿಸಿದರು.

### ನ. ರಾ. ಪುರ ರೋಟರಿ ಸಂಸ್ಥೆ

(ವರದಿ: ನ. ಸು. ರವಿಶಂಕರ್)

ನ. ರಾ. ಪುರ: ಸ್ಥಳೀಯ ರೋಟರಿ ಸಂಸ್ಥೆ ಏ ೧೧ ರಂದು ಪ್ರಥಮ ವಾರ್ಷಿಕೋತ್ಸವವನ್ನು ಆಚರಿಸಿತು. ರೋಟರಿ ಕಾರ್ಯದರ್ಶಿ ಎಂ.ಕೆ.ಜಾಕೊಬ್ ಒಂದು ವರ್ಷದ ಕಾರ್ಯ ಹಾಗೂ ಪ್ರಗತಿಯನ್ನು ತಿಳಿಸಿದರು. ಮುಖ್ಯ ಅತಿಥಿಯಾಗಿ ಬಂದಿದ್ದ ಮಾಜಿ ರೋಟರಿ ಗೌರ್ನರ್ ಎ.ಸಿ. ಶಿವೇಗೌಡ ನ. ರಾ ಪುರದ ರೋಟರಿ ಕಾರ್ಯ ಪ್ರಗತಿಯನ್ನು ಪ್ರಶಂಸಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಅಧ್ಯಕ್ಷ ಗೋಕುಲ್ ಚಂದ್ ಸಿಘಾನಿಯವರು ಭಾಗವಹಿಸಿದ್ದರು. ಕೊನೆಯಲ್ಲಿ ರೋಟರಿ ಅಧ್ಯಕ್ಷ ಎನ್. ಪಿ. ಗೋವಿಂದೇಗೌಡರು ತಮ್ಮ ಭಾಷಣದಲ್ಲಿ ರೋಟರಿ ಸೇವೆಯ ಬಗ್ಗೆ ವಿವರಿಸಿದರು.

## ವೇದ ಶಿಬಿರದ ಉದ್ಘಾಟನೆ

ಹರಿಹರಪುರ: ಇಲ್ಲಿನ ಪ್ರಬೋಧಿನಿ ಟ್ರಸ್ಟಿನವರು ಕಳೆದ ವರುಷದಂತೆ ಸಂಯೋಜಿಸಿದ ೨೦ ದಿನಗಳ ವೇದ ಶಿಕ್ಷಾವರ್ಗ ಇದೇ ೧೨ರಂದು ಇಲ್ಲಿನ 'ಚಿತ್ರಕೂಟ'ದಲ್ಲಿ ಉದ್ಘಾಟಿಸಲ್ಪಟ್ಟಿತು.

ಇಲ್ಲಿನ ಜನಪ್ರಿಯ ವೈದ್ಯಾಧಿಕಾರಿ ಡಾ॥ ಸಿದ್ದಯ್ಯ ದೀಪ ಬೆಳಗುವ ಮೂಲಕ ಶಿಬಿರ ಉದ್ಘಾಟಿಸಿ ವೇದದ ಜ್ಞಾನಜ್ಯೋತಿ ಜಾತಿಭೇದ ಇಲ್ಲದೆ ಎಲ್ಲರ ಮನ ಬೆಳಗಬೇಕಿದೆ ಎಂದರು. ಜಾಬಾಲಿಪುರ ಮಠಾಧೀಶರು ಹಾಗೂ ಇಲ್ಲಿನ ಶ್ರೀಮಠದ ಗುರುಗಳು ವೇದದ ಮಹತ್ವ ಮತ್ತು ವೇದ ಶಿಬಿರಗಳ ಉಪಯುಕ್ತತೆ ಬಗ್ಗೆ ಮಾತನಾಡಿದರು.

ಅನೇಕ ಜಿಲ್ಲೆಗಳಿಂದ ನಿರೀಕ್ಷೆಗೂ ಮೀರಿ ಸುಮಾರು ೧೦೦ ಶಿಕ್ಷಾರ್ಥಿಗಳು ಬಂದಿದ್ದು ಮೇ ೧ ರ ವರೆಗೆ ನಡೆವ ಈ ಶಿಬಿರದಲ್ಲಿ ಉಚಿತವಾಗಿ ವೇದ-ಸಂಸ್ಕೃತ -ಯೋಗಾಸನ ಇತ್ಯಾದಿ ಶಿಕ್ಷಣವನ್ನು ಜಾತಿ ಭೇದ ಇಲ್ಲದೆ ಎಲ್ಲ ಹಿಂದುಗಳಿಗೂ ನೀಡಲಾಗುತ್ತಿದೆ.

# ಮದುವೆ ಸಂಭ್ರಮದಲ್ಲಿ ಪೋಲಿಸ್ ಠಾಣೆ

(ವರದಿ: ಏಜೆನ್ಸೀಸ್)

ನರಸಿಂಹರಾಜಪುರ: ಇಲ್ಲಿನ ಪೋಲಿಸ್ ಠಾಣೆಯಲ್ಲಿ ಏ. ೧೫ ರಂದು ಅಪರೂಪಕ್ಕೊಂದು ಹಬ್ಬದ ವಾತಾವರಣ. ಗಂಭೀರವಾಗಿರುತ್ತಿದ್ದ ಆವರಣ ಮದುವೆಮನೆಯ ಸಂಭ್ರಮ ಸಡಗರಗಳಿಂದ ನಲಿಯುತ್ತ ಪ್ರೇಕ್ಷಕರನ್ನು ರಂಜಿಸಿತು.

ತಮ್ಮ ಮದುವೆಗೆ ಹಿರಿಯರಿಂದ ಅಡ್ಡಿ ಬರಬಹುದೆಂದೋ ಏನೋ, ಮೂರು ಜೊತೆ ವಧೂವರರು ಪೋಲಿಸ್ ಸಮ್ಮುಖದಲ್ಲಿ ಮದುವೆಯಾಗಲು ಇಷ್ಟಪಟ್ಟಿದ್ದರಿಂದ ಠಾಣಾಧಿಕಾರಿ ಲಕ್ಷ್ಮೀಶ್‌ರವರು ಸಬ್ ರಿಜಿಸ್ಟ್ರಾರ ಸಹಕಾರದೊಂದಿಗೆ ಇವರುಗಳ 'ಮದುವೆಗೆ' ವ್ಯವಸ್ಥೆ ಮಾಡಿದರು. ಮೂರೂ ಅಂತರ್ಜಾತಿ ಮದುವೆಗಳು.

ವಧೂವರರ ಕಡೆಯಿಂದ ಒಬ್ಬರ ತಾಯಿ, ಇನ್ನೊಬ್ಬರ ತಂದೆ, ಇನ್ನೊಬ್ಬರ ಸಂಬಂಧಿ —ಹೀಗೆ ಕೆಲವರು ಜೊತೆಯಲ್ಲಿ ಬಂದಿದ್ದರು. ಸುಮಾರು ಮುನ್ನೂರು ಜನ ಸಮಾರಂಭದಲ್ಲಿ ಪಾಲ್ಗೊಂಡರು.

ನೆರೆದವರ ಸಮ್ಮುಖದಲ್ಲಿ, ಠಾಣೆಯ ಶಿವ ದೇವಾಲಯದಲ್ಲಿ ಪೂಜಾ ವಿಧಿಗಳ ಸಾಂಪ್ರದಾಯಿಕ ಮದುವೆ. ಈ ಜೋಡಿಗಳನ್ನ ನೆನೆಗುದಿಯ ಹಂತದಿಂದ ಒಂದು ನೆಲೆ ಕಾಣಿಸಿದ ಕೀರ್ತಿ ಪೋಲೀಸ್ ಇಲಾಖೆಗೆ ಸಲ್ಲತಕ್ಕದ್ದು.

ಲಕ್ಷ್ಮೀಶ್‌ರವರು ಠಾಣಾಧಿಕಾರಿಯಾಗಿ ಬಂದ ಮೇಲೆ ಇಂಥ ಮದುವೆ ನಡೆಯುತ್ತಿರುವುದು ಇದು ನಾಲ್ಕನೇ ಸಲ.

ಸಂಪಾದಕ, ಪ್ರಕಾಶಕ ಮತ್ತು ಮುದ್ರಕ: ಸಿರಿಮನೆ ನಾಗರಾಜ್.
ಅಚ್ಚು: ನೇಸರ ಮುದ್ರಣ, ಕೊಪ್ಪ.